# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೩, ೨೦೧೪ (ಕಾರ್ತೀಕ ೧, ಶಕ ವರ್ಷ ೧೯೩೬)<br>Bangalore, Thursday, October 23, 2014 (Karthika 1, Shaka Varsha 1936) | ಸಂಚಿಕೆ ೪೨<br>Issue 42 |
|---|---|---|


## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

### ಜಿಲ್ಲಾಧಿಕಾರಿಗಳು ಹಾಗೂ ಸಮೂಹ ವ್ಯವಸ್ಥಾಪಕರು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ಕಾರ್ಯಾಲಯ

**ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕಾಯ್ದೆ 2013 ರ (ದಿನಾಂಕ 01-01-2014 ರಿಂದ ಜಾರಿಗೆ ತಂದ ಅಧಿಸೂಚನೆ ಪ್ರಕಾರ) ರೊಂದಿಗೆ ಓದಲಾದ ಕಲಂ 11(1) ರಲ್ಲಿ ಮಾಡಿದ**

**ಅಧಿಸೂಚನೆ**

**ಸಂಖ್ಯೆ : ಎಲ್‌ಎಕ್ಯೂ/ಸಿಆರ್ 50/13-14, ಬೆಂಗಳೂರು, ದಿನಾಂಕ: 30ನೇ ಆಗಸ್ಟ್, 2014**

ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಕಲ್ಲುಬಾಳು ಗ್ರಾಮದ ಸರ್ವೆ ನಂ.59 ರಲ್ಲಿ 1-03 ಎಕರೆ/ಗುಂಟೆ ಜಮೀನು ರಸ್ತೆಗಾಗಿ ಜಮೀನನ್ನು ಪರಿಹಾರ ನೀಡದೇ ಈಗಾಗಲೇ ಸ್ಥಳೀಯ ಗ್ರಾಮ ಪಂಚಾಯಿತಿಯು ಸಾರ್ವಜನಿಕ ಉದ್ದೇಶಕ್ಕೆ ಬಳಸಿಕೊಳ್ಳುತ್ತಿರುವುದರಿಂದ ಹಾಗೂ ಸ್ವಾಧೀನದಲ್ಲಿರುವುದರಿಂದ ಭೂಮಾಲೀಕರಾದ ಸಿದ್ದಪ್ಪ ಬಿನ್ ನಂಜುಂಡಯ್ಯ ಎಂಬುವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ.24151/2011 ರಂತೆ ರಿಟ್ ಅರ್ಜಿ ಸಲ್ಲಿಸಿ ದಿನಾಂಕ 19-03-2012 ರಂದು ಆದೇಶವಾಗಿರುತ್ತದೆ. ಈ ಆದೇಶವನ್ನು ಪಾಲನೆ ಮಾಡಿಲ್ಲವೆಂದು ಭೂಮಾಲೀಕರು ಕರ್ನಾಟಕ ಉಚ್ಚ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: ಸಿಸಿಸಿ 468/2014 ರಂತೆ ನಿಂದನಾ ಅರ್ಜಿ ಸಲ್ಲಿಸಿ ದಿನಾಂಕ 04-04-2014 ರಂದು ತೀರ್ಮಾನವಾಗಿದೆ. ಈ ಆದೇಶವನ್ನು ಪಾಲನೆ ಮಾಡಿಲ್ಲವೆಂದು ಭೂ ಮಾಲೀಕರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ 902/2014ರಂತೆ ಪುನಃ ನಿಂದನಾ ಅರ್ಜಿ ದಾಖಲಾಗಿ ವಿಚಾರಣೆ ಹಂತದಲ್ಲಿರುತ್ತದೆ. ನ್ಯಾಯಾಲಯದ ಆದೇಶದಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿದ ಜಮೀನುಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ **ದೇವಸ್ಥಾನ, ಸಮುದಾಯ ಭವನ, ಅಂಗನವಾಡಿ ಕೇಂದ್ರ ನೀರಿನ ಟ್ಯಾಂಕ್ ಮತ್ತು ರಸ್ತೆ ಅಭಿವೃದ್ಧಿಗಾಗಿ ಸ್ಥಳೀಯ ಸಂಸ್ಥೆಯಾದ ಗ್ರಾಮಪಂಚಾಯಿತಿಯು ಕಲ್ಲುಬಾಳು ಗ್ರಾಮದ ಸರ್ವೆ ನಂ.59 ರ 1-03 ಎಕರೆ/ಗುಂಟೆ ರಲ್ಲಿ 0-08 ಗುಂಟೆ ಖರಾಬು ಜಾತಾ 0-35 ಗುಂಟೆ ವಿಸ್ತೀರ್ಣದ ಜಮೀನನ್ನು ಸಾರ್ವಜನಿಕ ಬಳಕೆಗೆ ಈಗಾಗಲೇ ಭೂಸ್ವಾಧೀನವಾಗದೆ, ಪರಿಹಾರ ನೀಡದೆ ಬಳಸಲಾಗಿರುವುದೆಂದು** ಜಿಲ್ಲಾಧಿಕಾರಿಗಳು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಬೆಂಗಳೂರು ಜಿಲ್ಲೆ, ಬೆಂಗಳೂರು ರವರಿಗೆ ಕಂಡು ಬಂದಿರುತ್ತದೆ.

ಈ ಮೂಲಕ ತಿಳಿಸುವುದೇನೆಂದರೆ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕಾಯ್ದೆ 2013 ರ (ದಿನಾಂಕ 01-01-2014 ರಿಂದ ಜಾರಿಗೆ ತಂದ ಅಧಿಸೂಚನೆ ಪ್ರಕಾರ) ಕರ್ನಾಟಕ ಸರ್ಕಾರದ ಆದೇಶ ಸಂ.ಕಂ.ಇ. 18 ಆರ್‌ಇಹೆಚ್ 2014 ದಿನಾಂಕ 06-02-2014 ರಂತೆ ಹೊಸ ಕಾಯ್ದೆ 2013 ರ ಕಲಂ 11ರ ಸೌಲಭ್ಯದ ಮೇರೆಗೆ (2013 ಕೇಂದ್ರದ 30ನೇ ಕಾಯ್ದೆ) ಸದರಿ ಕಾನೂನಿನ ಕಲಂ 12 ರ ಮೇರೆಗೆ ಪ್ರದತ್ತವಾದ ಅಧಿಕಾರ ಚಲಾಯಿಸುವಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಈ ಮೂಲಕ ಕಾರ್ಯಪಾಲನೆ ಪ್ರಾಧಿಕಾರವನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಬೆಂಗಳೂರು ಇವರಿಗೆ ನೀಡಲಾಗಿದೆ ಹಾಗೂ ಕಲಂ 43ರ ಮೇರೆಗೆ

ಪುನರ್ವಸತಿ ಪುನರ್‌ನಿರ್ಮಾಣದ ಅಧಿಕೃತ ಪ್ರಾಧಿಕಾರದ ಕಾರ್ಯಪಾಲನೆಯನ್ನು ಪುನರ್ವಸತಿ ಅಧಿಕಾರಿಗಳು / ವಿಶೇಷ ಭೂಸ್ವಾಧೀನಾಧಿಕಾರಿಗಳು ಇವರಿಗೆ ನೀಡಲಾಗಿದೆ.

ಸರ್ಕಾರದ ಆದೇಶ ಸಂ.ಕಂ.ಇ.36.ಭೂಸ್ವಾವಿ 2014 ದಿನಾಂಕ 13–3–2014 ರನ್ವಯ ಮತ್ತು ತಿದ್ದುಪಡಿ ಆದೇಶ ದಿನಾಂಕ 22–4–2014 ರನ್ವಯ ಕಲಂ 6(2) ರ ಅಡಿಯಲ್ಲಿ ನೀರಾವರಿ ಯೋಜನೆಗಳಿಗಾಗಿ ಭೂಸ್ವಾಧೀನಪಡಿಸುವಾಗ ಪರಿಸರದ ಮೇಲಿನ ಪರಿಣಾಮ ನಿರ್ಧರಣದ ಅಂಶ (Environment Impact Assessment) ಪ್ರಕ್ರಿಯೆಯನ್ನು ಬೇರಾವುದೇ ಕಾಯ್ದೆಗಳಡಿಯಲ್ಲಿ ಮಾಡಬೇಕಾದಲ್ಲಿ ಸಾಮಾಜಿಕ ನಿರ್ಧರಣದ ಅಂಶ (Social Impact Assessment) ಅನ್ವಯಿಸುವುದಿಲ್ಲವೆಂದು ಸ್ಪಷ್ಟೀಕರಿಸಿದೆ.

ಈಗಾಗಲೇ ಕೆಳಗಿನ ಅನುಸೂಚಿಯಲ್ಲಿ ಸೂಚಿಸಿದಂತೆ ಸದರಿ ಸ್ವತ್ತಿನಲ್ಲಿ ಒತ್ತುವರಿ ಮಾಡಿ ಸಾರ್ವಜನಿಕ ಉದ್ದೇಶಕ್ಕೆ ಸ್ಥಳೀಯ ಗ್ರಾಮಪಂಚಾಯಿತಿಯವರು ಬಳಕೆ ಮಾಡಿಕೊಂಡಿರುವುದರಿಂದ ಹಾಗೂ ಸ್ವಾಧೀನದಲ್ಲಿರುವುದರಿಂದ ಘನ ಉಚ್ಛ ನ್ಯಾಯಾಲಯದ ನಿರ್ದೇಶನದ ಮೇರೆಗೆ ಪರಿಹಾರ ನೀಡಬೇಕಾಗಿರುತ್ತದೆ. **ಈ ಸ್ವತ್ತನ್ನು ಈಗಾಗಲೇ ಬಳಕೆ ಮಾಡಿಕೊಂಡಿರುವುದರಿಂದ ಸಾರ್ವಜನಿಕರ ಆಕ್ಷೇಪಣೆಗಳನ್ನು ಸ್ವೀಕರಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.**

ಈ ಜಮೀನು ಸ್ವಾಧೀನ ಕೆಲಸ ನಿರ್ವಹಿಸುವಲ್ಲಿ ಸರ್ಕಾರದಿಂದ ನೇಮಿಸಲ್ಪಟ್ಟ ಮೋಜಣಿದಾರರಾಗಲೀ ಅಥವಾ ಈ ಕೆಲಸ ಮಾಡುವವರಿಗೆ ಯಾರೂ ಅಡ್ಡಿ ಮಾಡಕೂಡದೆಂದು ಎಚ್ಚರಿಸಲಾಗಿದೆ. ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕಾಯ್ದೆ 2013ರ ಕಾಯ್ದೆ ಕಲಂ 14(4) ರ ಮೇರೆಗೆ ಈ ಅಧಿಸೂಚನೆ ಪ್ರಕಟಗೊಂಡ ದಿನಾಂಕದಿಂದ ಸದರಿ ಸ್ವಾಧೀನಪಡಿಸಿಕೊಳ್ಳಲಿರುವ ಭೂಮಿಯನ್ನು ಒಪ್ಪಂದದ ಮೇರೆಗೆ ವಿಕ್ರಯಿಸುವ, ಭೋಗ್ಯಕ್ಕೆ ಅಡವಿಡುವ, ಅನುಭವಿಸುವ ಬದಲಾಯಿಸುವ ಅಥವಾ ಇನ್ನಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ನಿರ್ಬಂಧಿಸಿದೆ. ಅಂತಹ ಯಾವುದೇ ಕ್ರಯ ಅಥವಾ ಇನ್ನಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಐತೀರ್ಪು ರಚಿಸುವಾಗ ಗಣನೆಗೆ ತೆಗೆದುಕೊಳ್ಳದೇ ಅಂತಿಮವಾಗಿ ಸದರಿ ಕಾಯ್ದೆ ಅನ್ವಯ ಭೂಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ಬೆಂಗಳೂರು** **ತಾಲ್ಲೂಕು: ಆನೇಕಲ್** **ಹೋಬಳಿ: ಜಿಗಣಿ** **ಗ್ರಾಮ: ಕಲ್ಲುಬಾಳು**

| ಕ್ರ. ಸಂ | ಖಾತೆದಾರರ ಹೆಸರು/ಅನುಭವದಾರರ ಹೆಸರು | ಸರ್ಕಾರಿ/ ಸ್ವಂತ | ಸರ್ವೆ ನಂ. | ಜಮೀನಿನ ತರಹೆ | ಚಕ್ಕುಬಂದಿ | | | | ಬೇಕಾದ ಜಮೀನಿನ | | ಷರಾ |
|---|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಕ್ಷೇತ್ರ ಎ–ಗುಂ | ಆಕಾರ ರೂ.ಪೈ | |
| 1. | ಸಿದ್ದಪ್ಪ ಬಿನ್ ನಂಜುಂಡಯ್ಯ | ಸ್ವಂತ | 59 | ಖುಷ್ಕಿ | ಸ.ನಂ.65 | ಸ.ನಂ.58 ಮತ್ತು ರಸ್ತೆ | ಉಳಿಕೆ | ಸ.ನಂ.70 ಮತ್ತು ರಸ್ತೆ | 0–35<br>0–08 ಪಿ.ಕೆ.<br>1–03 | 1–10 | |

**ಜಿಲ್ಲಾಧಿಕಾರಿಗಳು,**
ಬೆಂಗಳೂರು ಜಿಲ್ಲೆ,
ಬೆಂಗಳೂರು

**PR: 101**
**S.C.25**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, Chikkaballpur ಜಿಲ್ಲೆ, Chikkaballpur
## ಭೂಸ್ವಾಧೀನ ಅಧಿನಿಯಮ 1894 (ತಿದ್ದುಪಡಿ ಅಧಿನಿಯಮ 1984) ಕಲಂ 4(1)ರ ಮೇರೆಗೆ ಅಧಿಸೂಚನೆ
## ಕ್ರಮಾಂಕ : LAQ:SR:03/2012-13 ದಿನಾಂಕ 31/12/2013

ಈ ಮುಂದಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಜಮೀನು ಒಂದು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಕೋಲಾರ್-ಚಿಕ್ಕಬಳ್ಳಾಪುರ ರೇಲ್ವೆ ಗೇಜ್ ಪರಿವರ್ತನೆ- ಶಿಡ್ಲಘಟ್ಟ ಗ್ರಾಮ ಎಂದು ಕರ್ನಾಟಕ ಸರ್ಕಾರದವರಿಗೆ ಕಂಡು ಬಂದಿರುವುದರಿಂದ,

ಕರ್ನಾಟಕ ಅಧಿನಿಯಮ 1961 ರ 17ರ ಮೂಲಕ ತಿದ್ದುಪಡಿಯಾದ ಭೂಸ್ವಾಧೀನ ಅಧಿನಿಯಮ 1894 (ಕೇಂದ್ರ) ಅಧಿನಿಯಮ ಸಂಖ್ಯೆ 1984ರ 4ನೇ ಪ್ರಕರಣ (1)ನೇ ಉಪಪ್ರಕರಣದ ಉಪಬಂದಗಳ ಅನುಸಾರವಾಗಿ ಅದಕ್ಕೆ ಸಂಬಂದಪಟ್ಟ ಎಲ್ಲರಿಗೂ ಈ ಬಗ್ಗೆ ಈ ಮೂಲಕ ನೋಟೀಸುಗಳನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರದ ಅಧಿನಿಯಮ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಿಗಳನ್ನು ಚಲಾಯಿಸಲು ಉಪ ವಿಭಾಗಾಧಿಕಾರಿ ಚಿಕ್ಕಬಳ್ಳಾಪುರ ಇವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತೆ.

ಸದರಿ ಅದಿನಿಯಮದ 3(ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರದ ಅಧಿನಿಯಮದ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಕಾರ್ಯಗಳನ್ನು ನಿರ್ವಹಿಸಲು ಉಪ ವಿಭಾಗಾಧಿಕಾರಿ,ಉಪ ವಿಭಾಗಾಧಿಕಾರಿಗಳ ಕಛೇರಿ,ಚಿಕ್ಕಬಳ್ಳಾಪುರ ಇವರನ್ನು ನೇಮಕ ಮಾಡಿರುತ್ತೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾರೊಬ್ಬ ವ್ಯಕ್ತಿಯು ಈ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದರೆ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟವಾದ 30 ದಿನಗಳ ಒಳಗಾಗಿ 1991ನೇ ಸಾಲಿನ ಕರ್ನಾಟಕ ಅಧಿನಿಯಮ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರವು ನೇಮಕ ಮಾಡಲಾದ ಉಪ ವಿಭಾಗಾಧಿಕಾರಿ,ಉಪ ವಿಭಾಗಾಧಿಕಾರಿಗಳ ಕಛೇರಿ,ಚಿಕ್ಕಬಳ್ಳಾಪುರ, ರವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು. ಕರ್ನಾಟಕ ಸರ್ಕಾರದ ಅಧಿಸೂಚನೆ LAQ:SR:03/2012-13ನ್ನು ನೋಡಿ.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಮೋಜಿಣಿದಾರರ ಅಥವಾ ಬೇರೆ ವ್ಯಕ್ತಿಗಳಿಗೆ ಅಡಚಣೆವುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಅಥವಾ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚವು ಅಭಿವೃದ್ಧಿಗಳನ್ನು ಈ ಅಧಿಸೂಚನೆಯು ಪ್ರಕಟವಾದ ನಂತರ ಜಿಲ್ಲಾಧಿಕಾರಿಗಳು, Chikkaballpur ಜಿಲ್ಲೆ ರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆಗಾಗಿ ಮಾಡಲಾದ ಅಂತಹ ಭಾಗಗಳಿಗೆ ಪರಿಹಾರ ಧನವನ್ನು ನಿರ್ದರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣ 7ನೇ ಖಂಡದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ಕರಡು ನಕ್ಷೆಯನ್ನು ಉಪ ವಿಭಾಗಾಧಿಕಾರಿ, ಉಪ ವಿಭಾಗಾಧಿಕಾರಿಗಳ ಕಛೇರಿ, ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ : Chikkaballpur** **ತಾಲ್ಲೂಕು : Sidlaghatta** **ಹೋಬಳಿ : ಕಸಬಾ** **ಗ್ರಾಮ : ಶಿಡ್ಲಘಟ್ಟ**

**Agricultural**

| ಕ್ರ.ಸ. | ಖಾತೆದಾರರ ಹೆಸರು | ಸಾಗುವಳಿದಾರರು | ಸರ್ವೆ ನಂ | ತರಹೆ | ಚಕ್ಕು ಬಂದಿ | | | | ಭೂ ಸ್ವಾಧೀನ ವಿವರ | |
|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ವಿಸ್ತೀರ್ಣ | ಮೌಲ್ಯ |
| 1 | ಪಿಳ್ಳಮ್ಮ /ಶ್ರೀನಿವಾಸಪ್ಪ 90X150 ಅಡಿ , 30X150 ಅಡಿ | | 55/*/1 | ಖುಷ್ಕಿ | ರೈಲ್ವೆ ಹಳಿ | ಸರ್ವೆ ನಂ.55/2ಬಿ ರ ಜಮೀನು | ಸರ್ವೆ ನಂ.55/1 ರ ಉಳಿಕೆ ಜಮೀನು | ಸರ್ವೆ ನಂ.55/4 ರ ಜಮೀನು | 0.01.08.00 | 0-05 |
| | ಪಿಳ್ಳಮುದ್ದಪ್ಪ /ಬಚ್ಚಮ್ಮ 90X150 ಅಡಿ 30X150 ಅಡಿಗಳು | | | | | | | | Joint Owner | |
| | ವೆಂಕಟಪ್ಪ /ಮರಿಯಪ್ಪ 90X150 ಅಡಿ , 30X150 ಅಡಿಗಳು | | | | | | | | Joint Owner | |
| | | | | | | | | | 0.01.08.00 | |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸ. | ಖಾತೆದಾರರ ಹೆಸರು | ಸಾಗುವಳಿದಾರರು | ಸರ್ವೆ ನಂ | ತರಹೆ | ಚಕ್ಕು ಬಂದಿ | | | | ಭೂ ಸ್ವಾಧೀನ ವಿವರ | |
|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ವಿಸ್ತೀರ್ಣ | ಮೌಲ್ಯ |
| 2 | ಚಿಕ್ಕಮದ್ದಮ್ಮ /L B ನಂಜಪ್ಪ | | 55/*/4 | ಖುಷ್ಕಿ | ರೈಲ್ವೆ ಹಳಿ | ಸರ್ವೆ ನಂ.55/1 ರ ಜಮೀನು | ಸರ್ವೆ ನಂ.55/4 ರ ಉಳಿಕೆ ಜಮೀನು | ಊರು | 0.01.00.00 | 00-3 |

0.01.00.00

Village Extents: 0.02.08.00

Agricultural Total Extents: 0.02.08.00

DESIGNATION : ಉಪ ವಿಭಾಗಾಧಿಕಾರಿ

LAOCIRCLE : ಉಪ ವಿಭಾಗಾಧಿಕಾರಿಗಳ ಕಛೇರಿ

LAOLOCATION : ಚಿಕ್ಕಬಳ್ಳಾಪುರ

ಜಿಲ್ಲಾಧಿಕಾರಿಗಳು

Chikkaballpur ಜಿಲ್ಲೆ.

**PR-102**
**SC-5**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59